# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1964 |
| ಸದಸ್ಯರ ಹೆಸರು | : | ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸುವವರು | : | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಬಳ್ಳಾರಿ, ಚಿತ್ರದುರ್ಗ, ತುಮಕೂರು ಮುಂತಾದ ಜಿಲ್ಲೆಗಳಲ್ಲಿ ಅವೈಜ್ಞಾನಿಕವಾಗಿ ಮತ್ತು ಕಾನೂನುಬಾಹಿರವಾಗಿ ಅಕ್ರಮ ಗಣಿಗಾರಿಕೆ ನಡೆಸಿ, ಪರಿಸರ ಮತ್ತು ಭೂಮಿಗೆ ಅಗಾಧವಾದ ಧಕ್ಕೆ ಉಂಟು ಮಾಡಿರುವುದನ್ನು ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಪುನರ್ ಸ್ಥಾಪಿಸಲು ಒಂದು ಪರಿಸರ ಸಂರಕ್ಷಣಾ ನಿಧಿಯನ್ನು ಸ್ಥಾಪಿಸರುವುದು ನಿಜವೆ: (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದ ಬಳ್ಳಾರಿ, ಚಿತ್ರದುರ್ಗ, ತುಮಕೂರು ಜಿಲ್ಲೆಗಳಲ್ಲಿ ಪರಿಸರ ಹಾನಿಯನ್ನು ಪುನರ್‌ಸ್ಥಾಪಿಸುವ CEPMIZ ಯೋಜನೆಯ ಅನುಷ್ಠಾನಕ್ಕೆ ಅವಶ್ಯವಿರುವ ಸಂಪನ್ಮೂಲವನ್ನು ಕ್ರೋಢೀಕರಿಸಲು, ಮಾನ್ಯ ಸರ್ವೋಚ್ಚ ನ್ಯಾಯಾಲಯವು ಗಣಿ ಮತ್ತು ಭೂವಿಜ್ಞಾನ ಇಲಾಖೆಯಡಿಯಲ್ಲಿ ಮಾನಿಟರಿಂಗ್ ಕಮಿಟಿಯೊಂದನ್ನು ರಚಿಸಿದೆ.<br><br>ಯೋಜನೆಯ ಅನುಷ್ಠಾನಕ್ಕೆ ಅವಶ್ಯವಿರುವ ಸಂಪನ್ಮೂಲವನ್ನು ಅಕ್ರಮ ಗಣಿಗಾರಿಕಾ ಕಂಪನಿಗಳಿಂದ ಮುಟ್ಟುಗೋಲು ಹಾಕಿರುವ ಅದಿರಿನ ಮೊತ್ತ, ಗಣಿಗಾರಿಕಾ ಕಂಪನಿಗಳಿಂದ ದಂಡದ ಮೂಲಕ ವಸೂಲಿ ಮಾಡಿದ ಮೊತ್ತ, ಕೆಟಗರಿ-ಎ ಮತ್ತು ಕೆಟಗರಿ-ಬಿ ಗಣಿಗಾರಿಕಾ ಕಂಪನಿಗಳ ಅದಿರು ಮಾರಾಟದ ಒಟ್ಟು ಮೊತ್ತದ ಶೇಕಡ 10-15% ರಷ್ಟು ಮೊತ್ತ, ವಿವಿಧ ರೀತಿಯ ಪರಿಹಾರ ಮೊತ್ತಗಳು (Compensation towards dump, mining pit and others) ಮುಟ್ಟುಗೋಲು ಹಾಕಿರುವ EMD ಮೊತ್ತ, ಮುಂತಾದವುಗಳಿಂದ ಕ್ರೋಢೀಕರಿಸಬೇಕೆಂದು ಮಾನ್ಯ ಸರ್ವೋಚ್ಚ ನ್ಯಾಯಾಲಯ ಆದೇಶಿಸಿದೆ. ಅದರಂತೆ, ಡಿಸೆಂಬರ್, 2020 ರವರೆಗೆ ಕ್ರೋಢೀಕೃತವಾದ ಒಟ್ಟು ಮೊತ್ತ ರೂ.16,802/- ಕೋಟಿಗಳಾಗಿದ್ದು, ಸದರಿ ಮೊತ್ತವು ಮಾನಿಟರಿಂಗ್ ಕಮಿಟಿಯ ಸುಪರ್ಧಿನಲ್ಲಿರುತ್ತದೆ. |
| ಆ) | ಈ ಪರಿಸರ ಸಂರಕ್ಷಣಾ ನಿಧಿಗೆ ಪ್ರಾರಂಭದಿಂದಲೂ ತಹಲ್ ವರೆಗೆ ಸಂದಾಯವಾಗಿರುವ ಹಣವೆಷ್ಟು: (ಜಿಲ್ಲಾವಾರು ಮತ್ತು ವರ್ಷವಾರು ಮಾಹಿತಿ ನೀಡುವುದು) | ದಿನಾಂಕ:31.12.2020ರ ವರೆಗೆ ಮಾನಿಟರಿಂಗ್ ಕಮಿಟಿಯಲ್ಲಿ ಸಂಗ್ರಹವಾಗಿರುವ ಒಟ್ಟು ಮೊತ್ತ ರೂ.16,802/- ಕೋಟಿ ಆಗಿರುತ್ತದೆ. (ರೂ.6,528/- ಕೋಟಿ ಬಡ್ಡಿಯ ಮೊತ್ತವನ್ನು ಒಳಗೊಂಡಂತೆ) (ಅನುಬಂಧ– 1) |
| ಇ) | ಪರಿಸರ ಸಂರಕ್ಷಣಾ ಕಾರ್ಯವನ್ನು ಪರಿವೀಕ್ಷಿಸಲು ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಉಸ್ತುವಾರಿ ಸಮಿತಿಯನ್ನು ರಚಿಸಲಾಗಿದೆಯೇ (ಸಮಿತಿ ಕಾರ್ಯನಿರ್ವಹಣೆಯ ವಿವರ ನೀಡುವುದು) | CEPMIZ ಯೋಜನೆಯ ಅನುಮೋದನೆ ಮತ್ತು ಅದರ ಅನುಷ್ಠಾನದ ಮೇಲುಸ್ತುವಾರಿಗಾಗಿ Oversight Authority ರಚಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯವನ್ನು ಕೋರಲಾಗಿದೆ. ಈ ಕುರಿತು ನ್ಯಾಯಾಲಯದ ಆದೇಶ ನಿರೀಕ್ಷಿಸಲಾಗುತ್ತಿದೆ. |
| ಈ) | ಬಾಧಿತ ಜಿಲ್ಲೆಗಳಲ್ಲಿ ಪರಿಸರ ಸಂರಕ್ಷಣಾ ಕಾರ್ಯಗಳನ್ನು ಕೈಗೊಳ್ಳಲು ಜಿಲ್ಲಾ ಖನಿಜ ನಿಧಿ (DMF) ಮತ್ತು ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಸ್ಥಾಪಿತವಾಗಿರುವ ವಿಶೇಷ ಉದ್ದೇಶಿತ ವಾಹನಗಳ (SPV) ನಿಧಿಗಳ ಅಡಿಯಲ್ಲಿ ರೂಪಿಸಿರುವ ಕಾರ್ಯಕ್ರಮಗಳು ಮತ್ತು ಯೋಜನೆಗಳನ್ನು ಒಳಗೊಂಡ ಕ್ರಿಯಾ ಯೋಜನೆಗಳು ಯಾವುವು: ಅವುಗಳ ಅನುಷ್ಠಾನ ಯಾವ ಹಂತದಲ್ಲಿವೆ: (ಭೌತಿಕ ಮತ್ತು ಆರ್ಥಿಕ ಗುರಿಗಳನ್ನೊಳಗೊಂಡಂತೆ ವಿವರ ನೀಡುವುದು) | ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶದ ಅನ್ವಯ ಕರ್ನಾಟಕ ಗಣಿ ಪರಿಸರ ಪುನ:ಶ್ಚೇತನ ನಿಗಮ ಕ್ಕೆ ಸಂಬಂಧ ಪಟ್ಟಂತೆ ಬಳ್ಳಾರಿ, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳ ಗಣಿಗಾರಿಕೆಯಿಂದ ಭಾದಿತವಾದ ಪ್ರದೇಶಗಳ ಪರಿಸರ ಅಭಿವೃದ್ಧಿ, ಸಮುದಾಯಗಳ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಮತ್ತು ಗಣಿಗಾರಿಕೆಗೆ ಅವಶ್ಯಕವಾಗಿರುವ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ವಿವಿಧ ಇಲಾಖೆಗಳು ಕೈಗೊಳ್ಳಲು ಉದ್ದೇಶಿಸಿರುವ ಕಾರ್ಯಚಟುವಟಿಕೆಗಳನ್ನು ಜಿಲ್ಲಾಡಳಿತ ಗುರುತಿಸಿ ಸರ್ಕಾರದ ಮಟ್ಟದಲ್ಲಿ ಕ್ರೋಢೀಕರಿಸಿ, ಒಟ್ಟು ರೂ.24,996.71 ಕೋಟಿ ಮೊತ್ತದ Comprehensive Environment Plan for Mining Impact Zone(CEPMIZ) ಎಂಬ ಯೋಜನೆಯನ್ನು ತಯಾರಿಸಿ ಅಕ್ಟೋಬರ್, 2018 ರಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಅನುಮೋದನೆಗಾಗಿ ಸಲ್ಲಿಸಲಾಗಿದೆ. ಇಲಾಖಾವಾರು ಮತ್ತು ಶೀರ್ಷಿಕೆವಾರು ಅಂದಾಜು ವೆಚ್ಚದ ವಿವರ ಅನುಬಂಧ-2 ರಲ್ಲಿ ಲಗತ್ತಿಸಿದೆ. |

| | | |
|---|---|---|
| ಉ) | ರಾಜ್ಯ ಸರ್ಕಾರ ತಯಾರಿಸಿರುವ ಪರಿಸರ ಸಂರಕ್ಷಣಾ ಕ್ರಿಯಾ ಯೋಜನೆಯನ್ನು ಕೈಗೆತ್ತಿಕೊಳ್ಳಲು ಸರ್ವೋಚ್ಚ ನ್ಯಾಯಾಲಯದ ಅನುಮತಿ ದೊರೆತಿದೆಯೇ: ಇಲ್ಲದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಅಕ್ಟೋಬರ್, 2018 ರಲ್ಲಿ ಸಲ್ಲಿಸಲಾಗಿರುವ ರೂ.24,996.71 ಕೋಟಿ ಮೊತ್ತದ Comprehensive Environment Plan for Mining Impact Zone (CEPMIZ) ಯೋಜನೆಗೆ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಅನುಮೋದನೆ ಈವರೆಗೆ ದೊರೆತಿರುವುದಿಲ್ಲ. ಅನುಮೋದನೆ ಪಡೆಯಲು ನಿರಂತರ ಕ್ರಮ ಕೈಗೊಳ್ಳಲಾಗಿದೆ. ಕೈಗೊಂಡ ಕ್ರಮಗಳ ವಿವರವನ್ನು ಅನುಬಂಧ - 3 ರಲ್ಲಿ ಲಗತ್ತಿಸಿದೆ. |

**ಸಂಖ್ಯೆ: ಸಿಐ 60ಎಂಎಂಎಂ 2021**

**(ಮುರುಗೇಶ್ ಆರ್. ನಿರಾಣಿ)**
ಗಣಿ ಮತ್ತು ಭೂವಿಜ್ಞಾನ ಸಚಿವರು

Gen 2008-2

MONITORING COMMITTEE
Department of Mines & Geology
5th Floor, Race Course Road,
Kanijha Bhavan,
BANGALORE-560 001
S P V Accounts as on 31.12.2020

| Sl No | Particulars | Amount in Rs . | Rs. In Crs |
|---|---|---|---|
| 1 | C- CATEGORY FORFEITED AMOUNT | 18,226,931,691 | 1,823 |
| | SPV - C Category Auction (25% of Material Value) | 2,988,920,986 | 299 |
| | | | |
| 2 | **A Category Mining** | | |
| | SPV (10% Material Value)-OLD STOCK | 2,302,095,023 | 230 |
| | SPV (20% Material Value)-NMDC | 43,814,637,633 | 4,381 |
| | | | |
| 3 | **B Category Mining** | | |
| | SPV (15% Material Value)-OLD STOCK | 4,678,001,500 | 468 |
| | Compensation (Additional Dump, Etc.) | 16,300,000 | 2 |
| | Compensation (Dump, Etc.) | 929,100,000 | 93 |
| | Compensation (Mining Pit) | 2,379,543,942 | 238 |
| | Compensation (Road) | 85,500,000 | 9 |
| | Compensation Others | 1,236,755,570 | 124 |
| | Penalty Others | 6,972 | 0 |
| | | | |
| 4 | **A & B Category Mining** | | |
| | SPV (10% Material Value)-FRESH PRODUCTION | 24,164,805,656 | 2,416 |
| | | | |
| | EMD Forfeited Amount | 381,066,115 | 38 |
| | Net Interest Earned | 65,279,961,858 | 6,528 |
| | Amount not due to Lessees on because of Irregularity | | |
| | - Material Sourced from C Category Mines | 1,619,733,792 | 162 |
| | Material Value on Unlifted Quantity | 15,537,009 | 2 |
| | Amount paid to KMERC | (100,000,000) | (10) |
| | | | |
| | **Total-S P V Balance** | **168,018,897,748** | **16,802** |

Jagannath Poojary
Senior Manager Finance

Monitoring Committee



Prepared by
Raghavendra B.L.

Place: Bengaluru
Date : 13/01/2021

CEPMIZ ABSTRACT

# ಕರ್ನಾಟಕ ಗಣಿ ಪರಿಸರ ಪುನ:ಶ್ಚೇತನ ನಿಗಮ

ಬಳ್ಳಾರಿ, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ಗಣಿ ಬಾಧಿತ ಪ್ರದೇಶಗಳ ಪರಿಸರ ಪುನ:ಶ್ಚೇತನ ಮತ್ತು ಪುನ:ಸ್ಥಾಪನೆಗೆ ಹಾಗೂ ಸಮುದಾಯಗಳ ಸಮಾಜಿಕ/ಆರ್ಥಿಕ ಅಭಿವೃದ್ಧಿ ಮತ್ತು ಗಣಿಗಾರಿಕೆಗೆ ಅವಶ್ಯವಾದ ಮೂಲಭೂತ ಸೌಕರ್ಯಗಳ ಸ್ಥಪನೆಗಾಗಿ ವಿವಿಧ ಶಿರ್ಷಿಕೆಗಳಡಿಯಲ್ಲಿ CEPMIZ ಯೋಜನೆಗಳನ್ನು ಕಾರ್ಯಗತಗೊಳಿಸಲು ಉದ್ದೇಶಿಸಲಾಗಿದ್ದು, ಈ ಕೆಳಕಂಡ ವಿವರಗಳಂತೆ ಪ್ರಸ್ತಾವನೆಯನ್ನು ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಲಾಗಿರುತ್ತದೆ.

| ಕ್ರ.ಸಂ. | | ವಲಯಗಳು | ಬಳ್ಳಾರಿ | ಚಿತ್ರದುರ್ಗ | ತುಮಕೂರು | ಒಟ್ಟು ಮೊತ್ತ (ರೂ.ಕೋಟಿಗಳಲ್ಲಿ) |
|---|---|---|---|---|---|---|
| 1 | | **ಪರಿಸರ ಪುನ:ಸ್ಥಾಪನೆ** | | | | |
| | a | ಅರಣ್ಯ | 1557.79 | 540.83 | 500.52 | 2599.14 |
| | b | ಪರಿಸರ ಮಾಲಿನ್ಯ | 27.00 | 14.81 | 14.81 | 56.61 |
| | | **ಒಟ್ಟು** | **1584.79** | **555.64** | **515.33** | **2655.75** |
| 2 | | **ಕೃಷಿ ಮತ್ತು ಇತರೆ** | | | | |
| | a | ಕೃಷಿ | 442.45 | 324.85 | 287.10 | 1054.40 |
| | b | ತೋಟಗಾರಿಕೆ | 64.73 | 17.06 | 14.03 | 95.82 |
| | c | ರೇಷ್ಮೆ | 0.00 | 3.50 | 3.00 | 6.50 |
| | d | ಪಶುಸಂಗೋಪನೆ | 284.76 | 38.00 | 22.20 | 344.96 |
| | e | ಮೀನುಗಾರಿಕೆ | 89.99 | 7.63 | 3.75 | 101.37 |
| | | **ಒಟ್ಟು** | **881.93** | **391.04** | **330.08** | **1603.05** |
| 3 | | **ಕುಡಿಯುವ ನೀರು/ನೈರ್ಮಲ್ಯ ಮತ್ತು ಗ್ರಾಮೀಣ ರಸ್ತೆಗಳು** | | | | |
| | a | ಕುಡಿಯುವ ನೀರು | 2569.98 | 661.00 | 236.88 | 3467.86 |
| | b | ನೈರ್ಮಲ್ಯ | 374.00 | 37.00 | 13.00 | 424.00 |
| | c | ಗ್ರಾಮೀಣ ರಸ್ತೆಗಳು | 520.72 | 280.68 | 236.64 | 1038.04 |
| | | **ಒಟ್ಟು** | **3464.70** | **978.68** | **486.52** | **4929.90** |
| 4 | | **ಆರೋಗ್ಯ** | | | | |
| | a | ಜಿಲ್ಲಾ ಆಸ್ಪತ್ರೆ | 286.17 | 114.04 | 131.90 | 532.11 |
| | b | ತಾಲ್ಲೂಕ/ಸಿ.ಹೆಚ್.ಸಿ/ಪಿ.ಹೆಚ್.ಸಿ/ ಆಯುಷ್ ರಕ್ತ ನಿಧಿ, ಇತರೆ | 151.17 | 141.90 | 77.77 | 370.84 |
| | c | ವಿಶೇಷ ಆರೋಗ್ಯ ಕೇಂದ್ರ, ಸಂಡೂರು | 301.63 | | | 301.63 |
| | d | ಮೆಡಿಕಲ್ ಕಾಲೇಜು. ಬಳ್ಳಾರಿ | 711.20 | 0 | 0 | 711.20 |
| | | **ಒಟ್ಟು** | **1450.17** | **255.94** | **209.67** | **1915.78** |
| 5 | | **ಶಿಕ್ಷಣ** | | | | |
| | a | ಶಿಕ್ಷಣ | 413.49 | 280.58 | 186.62 | 880.69 |
| | b | ಪದವಿ ಪೂರ್ವ ಶಿಕ್ಷಣ | 230.00 | 50.00 | 5.66 | 285.66 |
| | | **ಒಟ್ಟು** | **643.49** | **330.58** | **192.28** | **1166.35** |

CEPMIZ ABSTRACT

| | | | | | |
|---|---|---|---|---|---|
| 6 | **ದುರ್ಬಲ ವರ್ಗಗಳ ಅಭಿವೃದ್ಧಿ** | | | | |
| a | ಮಹಿಳಾ ಮತ್ತು ಮಕ್ಕಳ ಕಲ್ಯಾಣ | 398.87 | 94.03 | 110.78 | 603.68 |
| b | ಸಮಾಜ ಕಲ್ಯಾಣ | 200.00 | 50.00 | 51.94 | 301.94 |
| c | ಹಿಂದುಳಿದ ವರ್ಗ | 78.03 | 25.31 | 25.00 | 128.34 |
| d | ಅಲ್ಪಸಂಖ್ಯಾತರ ಅಭೀವೃದ್ಧಿ | 18.70 | 19.20 | 10.70 | 48.60 |
| | **ಒಟ್ಟು** | **695.60** | **188.54** | **198.42** | **1082.56** |
| 7 | **ವಸತಿ** | 1027.00 | 106.88 | 60.00 | 1193.88 |
| 8 | **ಕೌಶಲ್ಯಾಭಿವೃದ್ಧಿ** | 436.19 | 70.79 | 31.27 | 538.25 |
| 9 | **ಪ್ರವಾಸೋದ್ಯಮ** | 148.00 | 34.00 | 7.00 | 189.00 |
| 10 | **ನೀರಾವರಿ** | 799.00 | 154.70 | 53.00 | 1006.70 |
| 11 | **ಮೂಲಭೂತ ಸೌಕರ್ಯ** | 734.99 | 105.29 | 44.08 | 884.36 |
| 12 | **ರಸ್ತೆ ಮತ್ತು ಸಂಪರ್ಕ** | 1512.55 | 620.22 | 426.40 | 2559.17 |
| 13 | **ರೈಲು ಮೂಲಸೌಕರ್ಯ** | | | | 5271.96 |
| | **ಒಟ್ಟು ಮೊತ್ತ** | 13378.41 | 3792.30 | 2554.05 | 24996.71 |

# ಕರ್ನಾಟಕ ಗಣಿ ಪರಿಸರ ಪುನಃಶ್ಚೇತನ ನಿಗಮ

## CEPMIZ ಕಿಯಾ ಯೋಜನೆಗೆ ಶೀಘ್ರ ಅನುಮೋದನೆ ಪಡೆಯುವಲ್ಲಿ ಕೈಗೊಂಡ ಕ್ರಮಗಳು

1. ಅಕ್ಟೋಬರ್ 9, 2018 ರಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ಪರಿಷ್ಕೃತ CEPMIZ ಕ್ರಿಯಾ ಯೋಜನೆಯನ್ನು ಸಲ್ಲಿಸಲಾಗಿತ್ತು. ದಿನಾಂಕ: 24.01.2019 ರ ಆದೇಶದಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಸದರಿ ಪ್ರಸ್ತಾವನೆಗೆ ಅನುಮೋದನೆ ನೀಡುವ ಕುರಿತು ಪರಿಶೀಲಿಸಿ ಒಂದು framework ನ್ನು ಸೂಚಿಸುವಂತೆ ಮಾನ್ಯ ಶ್ರೀ ಶ್ಯಾಮ್ ಧಿವಾನ್, Amicus Curiae ಯವರನ್ನು ಕೋರಿತ್ತು.
2. ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ದಿನಾಂಕ 15-02-2019 ರಂದು ಮಾನ್ಯ ಶ್ಯಾಮ್ ಧಿವಾನ್‌ರಿಗೆ KMERC ಯಿಂದ ವಿವರವಾದ ಟಿಪ್ಪಣಿಯನ್ನು ನೀಡಲಾಗಿದೆ. ಅಲ್ಲದೆ, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಕಾರ್ಯದರ್ಶಿಗಳು, ಹಾಗೂ ಕೆ.ಎಂ.ಇ.ಆರ್.ಸಿ ವ್ಯವಸ್ಥಾಪಕ ನಿರ್ದೇಶಕರು, ಶ್ರೀ ಧಿವಾನ್ ರವರನ್ನು ದೆಹಲಿಯಲ್ಲಿ ಖುದ್ದಾಗಿ ಭೇಟಿ ಮಾಡಿ ನ್ಯಾಯಾಲಯ ನೀಡಿರುವ ಆದೇಶಗಳ ಪಾಲನೆಯ ಬಗ್ಗೆ ವಿವರಿಸಿ, ಯೋಜನೆಗೆ ಆದಷ್ಟು ಬೇಗನೆ ನ್ಯಾಯಾಲಯದ ಮಂಜೂರಾತಿ ದೊರೆಯುವಂತೆ ಶಿಫಾರಸ್ಸು ಮಾಡಲು ಕೋರಲಾಗಿರುತ್ತದೆ.
3. ದಿನಾಂಕ 16-04-2019 ರಂದು, Central Empowered Committee (CEC), CIPMIZ ಯೋಜನೆಯನ್ನು ಅನುಮೋದಿಸುವಂತೆ ತನ್ನ ಸಲಹೆಗಳ ಸಮೇತ ನ್ಯಾಯಾಲಯಕ್ಕೆ ವರದಿ ಸಲ್ಲಿಸಿರುತ್ತಾರೆ.

4. ನಿಗಮದ ಹಿರಿಯ ವಕೀಲರು ದಿನಾಂಕ 06.03.2020 ರಂದು ಮಾನ್ಯ ನ್ಯಾಯಾಲಯದ ಮುಂದೆ ಯೋಜನೆ ಅನುಮೋದನೆ ಬಗ್ಗೆ ವಿಷಯ ಪ್ರಸ್ಥಾಪಿಸಿದ್ದು, (mentioning ಮಾಡಿದ್ದು) ಕೇಸನ್ನು ದಿನಾಂಕ 24.03.2020 ದಂದು ಲಿಸ್ಟ್ ಮಾಡುವಂತೆ ನ್ಯಾಯಾಲಯ ಸೂಚಿಸಿರುತ್ತದೆ. ಸದರಿ ದಿನಾಂಕದಂದು ಕೇಸು ಲಿಸ್ಟ್ ಆಗಿರುವುದಿಲ್ಲ.
5. COVID–19 ನಿಂದಾಗಿ ರಾಜ್ಯ ಸಂಕಷ್ಟದಲ್ಲಿದ್ದು, CEPMIZ ಯೋಜನೆಯನ್ನು ಶೀಘ್ರ ಅನುಮೋದಿಸುವಂತೆ ಹಾಗೂ ಹಣ ಬಿಡುಗಡೆ ಮಾಡುವಂತೆ ಕೋರಿ ದಿನಾಂಕ 15.04.2020 ರಲ್ಲಿ IA No. 48538/2020 ರ ಮೂಲಕ ಒಂದು Emergent application ನ್ನು ಮಾನ್ಯ ಸರ್ವೋಚ್ಚ ನ್ಯಾಯಲಯಕ್ಕೆ ಸಲ್ಲಿಸಲಾಗಿತ್ತು. ಹಾಗಿದ್ದು ಯೋಜನಗೆ ಅನುಮೋದನೆ ದೊರಕಿರುವುದಿಲ್ಲ.
6. ದಿನಾಂಕ 4.05.2020 ರಂದು ಮಾನ್ಯ Solicitor General ರವರ ಮೂಲಕ CEPMIZ ಅನುಮೋದನೆಗೆ ಕೇಸನ್ನು ಶೀಘ್ರ ಕೈಗೆತ್ತಿಕೊಳ್ಳಲು ಅರಿಕೆ (mentioning) ಮಾಡಿದ್ದು, ಮಾನ್ಯ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧಿಶರೊಂದಿಗೆ ಚರ್ಚಿಸಿ ಕೇಸ್ ಲಿಸ್ಟ್ ಮಾಡಲಾಗುವುದಾಗಿ ನ್ಯಾಯಾಲಯ ಸೂಚಿಸಿತ್ತು.
7. ದಿನಾಂಕ 18.05.2020 ರಂದು ಮಾನ್ಯ Solicitor General ರವರು ಪುನ: ಅರಿಕೆ (mentioning) ಸಲ್ಲಿಸಿದ್ದು, ಮಾನ್ಯ ನ್ಯಾಯಾಧೀಶರು ಈ ಬಗ್ಗೆ ನೋಡುವುದಾಗಿ ತಿಳಿಸಿರುತ್ತಾರೆ.

8. ಮಾನ್ಯ ಶ್ರೀ ಶ್ಯಾಮ್ ದಿವಾನ್, ld. Amicus Curiae ಯವರು 29.05.2020ರ ನ್ಯಾಯಾಲಯದ ಆದೇಶದಂತೆ ದಿನಾಂಕ 19.06.2020 ರಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ CEPMIZ ಅನುಮೋದನೆಗೆ ಶಿಫಾರಸ್ಸು ಮಾಡಿ ವರದಿ ಸಲ್ಲಿಸಿರುತ್ತಾರೆ.

9. ದಿನಾಂಕ 8.7.2020 ರಲ್ಲಿ ಕೇಸನ್ನು ಜರೂರಾಗಿ ಲಿಸ್ಟ್ ಮಾಡಲು ಕೋರಿ ಒಂದು mentioning application ನ್ನು e-filing ಮೂಲಕ ನ್ಯಾಯಾಲಯಕ್ಕೆ ಸಲ್ಲಿಸಲಾಗಿದೆ.

10. ದಿನಾಂಕ 22.07.2020 ರಂದು Solicitor General ರವರ ಮೂಲಕ ನ್ಯಾಯಾಲಯಕ್ಕೆ ಮತ್ತೊಂದು ಕೋರಿಕೆ ಪ್ರಸ್ತಾವನೆ (mentioning)ಸಲ್ಲಿಸಿದ್ದು, ನ್ಯಾಯಾಲಯವು ಕೇಸನ್ನು ಜರೂರಾಗಿ ಲಿಸ್ಟ್ ಮಾಡಲು ಕೋರಿರುವುದನ್ನು ಪರಿಗಣಿಸುವುದಾಗಿ ತಿಳಿಸಿದೆ.

11. ದಿನಾಂಕ 15.04.2020 ರಂದು ಸಲ್ಲಿಸಿದ್ದ emergent application ಗೆ FIMI ಹಾಗು ಸಮಾಜ ಪರಿವರ್ತನ ಸಮುದಾಯ, ಯೋಜನೆಗೆ ಕ್ರೂಢೀಕರಿಸಿರುವ ಮೊತ್ತವನ್ನು ಕೋವಿಡ್ ಗೆ ಅಥವಾ ಇನ್ನಾವುದೇ ಸಾಮಾನ್ಯ ಬಾಬ್ತುಗಳಿಗೆ ಖರ್ಚು ಮಾಡಬಾರದು ಎಂದು ತಕರಾರು ಅಪಿದವಿತ್ (reply affidavit) ಸಲ್ಲಿಸಿದ್ದವು. SPV ಖಾತೆಯ ಮೊತ್ತವನ್ನು ಕೇವಲ CEPMIZ ನಲ್ಲಿ ನಮೂದಿಸಿರುವ ಕಾಮಗಾರಿಗಳಿಗೆ ಮತ್ತು ಚಟುವಟಿಕೆಗಳಿಗೆ ಮಾತ್ರ ಬಳಸಲು ರಾಜ್ಯದ ವತಿಯಿಂದ ಅನುಮೋದನೆ ಕೋರಿರುವುದಾಗಿ ಹಾಗೂ CEPMIZ ನಲ್ಲಿರುವ ವಿವಿಧ, ಕಾಮಗಾರಿಗಳು ಮತ್ತು ಚಟುವಟಿಕೆಗಳನ್ನು 3 ಜಲ್ಲೆಗಳಲ್ಲಿ ಅನುಷ್ಠಾನಗೊಳಿಸಿದಲ್ಲಿ

ಗಣಿಗಾರಿಕೆಯಿಂದ ಉಂಟಾದ ಪರಿಸರ ಹಾನಿಯ ಪುನ:ಶ್ಚೇತನ ಮತ್ತು ಸಮುದಾಯದ ಸಮಗ್ರ ಅಭಿವೃದ್ಧಿ ಸಾಧ್ಯವೆಂದು ರಾಜ್ಯದ ನಿಲುವನ್ನು ಸೂಚಿಸುವ rejoinder ನ್ನು ದಿನಾಂಕ 13.08.2020 ರಂದು ಕೋರ್ಟಿಗೆ ಸಲ್ಲಿಸಲಾಗಿದೆ.

12. ದಿನಾಂಕ 27.10.2020 ರಂದು Solicitor General ರವರ ಮೂಲಕ ನ್ಯಾಯಾಲಯಕ್ಕೆ ಮತ್ತೊಂದು ಅರಿಕೆಯನ್ನು (mentioning) ಸಲ್ಲಿಸಿದ್ದು, ನ್ಯಾಯಾಲಯವು ಕೇಸನ್ನು ಪರಿಗಣಿಸುವುದಾಗಿ ತಿಳಿಸಿದೆ.
13. ದಿನಾಂಕ 5.11.2020 ರಂದು ಮತ್ತೊಂದು ಲಿಖಿತ ಅರಿಕೆ ಅರ್ಜಿಯನ್ನು (mentioning application) ಸಲ್ಲಿಸುವಂತೆ ಕೋರಿ AoR ರವರಿ ಪ್ರಸ್ತಾವನೆ ಕಳುಹಿಸಿ ಕೊಡಲಾಗಿದೆ.
14. CIPMIZ ಅನುಮೋದನೆ ಹಾಗೂ ಅನುಷ್ಠಾನದ ಮೇಲ್ವುವಾರಿಗಾಗಿ Oversight Authority ರಚಿಸಲು ಕರಡು ಸರ್ಕಾರಿ ಆದೇಶವನ್ನು ತಯಾರಿಸಿ ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಲು Advocate on Record (AoR) ರವರಿಗೆ ದಿನಾಂಕ 7-12-2020 ರಂದು ಕಳುಹಿಸಿಕೊಡಲಾಗಿದೆ.
15. CIPMIZ ಕ್ರಿಯಾ ಯೋಜನೆ ಬಗ್ಗೆ ಕಾನೂನಾತ್ಮಕ ಕ್ರಮಗಳನ್ನು ಜರುಗಿಸುವುದನ್ನು ಮೇಲ್ವಿಚಾರಣೆ ಮಾಡಲು/ನಿರ್ಣಯಗಳನ್ನು ತೆಗೆದುಕೊಳ್ಳಲು ರಾಜ್ಯ ಸರ್ಕಾರ ದಿನಾಂಕ 4.12.2020 ರಂದು ಸಂಪುಟ ಉಪಸಮಿತಿಯನ್ನು ರಚಿಸಿತ್ತು. ದಿನಾಂಕ 4.03.2021 ರಂದು ಸದರಿ ಸಮಿತಿಯನ್ನು ಪುನರ್ ರಚಿಸಿದೆ.
16. ದಿನಾಂಕ 02.02.2021 ರಂದು Solicitor General ರವರ ಮೂಲಕ ನ್ಯಾಯಾಲಯಕ್ಕೆ ಮತ್ತೊಂದು ಅರಿಕೆಯನ್ನು (mentioning) ಸಲ್ಲಿಸಿದ್ದು,

ನ್ಯಾಯಾಲಯವು IA ಗಳನ್ನು ಸಂಬದಪಟ್ಟ ನ್ಯಾಯಾಧಿಶರುಗಳಿಗೆ ವಿತರಿಸಿ, ತದನಂತರ ವಿಷಯವನ್ನು ತಿಳಿಸುವುದಾಗಿ ಹೇಳಿದೆ.

17. ದಿನಾಂಕ 13.02.2021 ರಂದು ಮಾನ್ಯ ಗಣಿಗಾರಿಕಾ ಸಚಿವರು ಹಾಗೂ ಕೆ.ಎಂ.ಇ.ಆರ್.ಸಿ ವ್ಯವಸ್ಥಾಪಕ ನಿರ್ದೇಶಕರು ಮಾನ್ಯ ಕೇಂದ್ರ ಗಣಿ ಸಚಿವರನ್ನು ಬೇಟಿ ಮಾಡಿ CEPMIZ ಗೆ ನ್ಯಾಯಲಯದ ಶೀಘ್ರ ಅನುಮೋದನೆ ಪಡೆಯುವ ನಿಟ್ಟಿನಲ್ಲಿ ಚರ್ಚಿಸಲಾಗಿದೆ.

18. ದಿನಾಂಕ 24.02.2021 ರಂದು Solicitor General ರವರ ಮೂಲಕ ನ್ಯಾಯಾಲಯಕ್ಕೆ ಮತ್ತೊಂದು ಅರಿಕೆಯನ್ನು (mentioning) ಸಲ್ಲಿಸಿದ್ದು, ನ್ಯಾಯಾಲಯವು ಕೇಸನ್ನು ಮುಂದಿನ ವಾರ ಪರಸ್ಥಿತಿಗನುಗುಣವಾಗಿ ಲಿಸ್ಟ್ ಮಾಡಲು ಪ್ರಯತ್ನಿಸುವುದಾಗಿ ತಿಳಿಸಿತ್ತು. ಆದರೆ, ಮಾರ್ಚ್ ಮೊದಲ ವಾರ ಕೇಸ್ ಲಿಸ್ಟ್ ಆಗಿರುವುದಿಲ್ಲ.

**************